ಸೆಪ್ಟೆಂಬರ್ – 2020

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಶಶಿಧರಸ್ವಾಮಿ ಆರ್. ಹಿರೇಮಠ

**ಪರಿಷ್ಕರಣೆ**

ಮುರಳಿ ಎಸ್.

ಅನನ್ಯರೂಪ

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು




© ಹಯಾತ್ ಮೊಹಮ್ಮದ್

# ಕರಿ ಗರಕಲೆ

**ಸಾಮಾನ್ಯ ಹೆಸರು :** Donkey berry, Sandpaper raisin

**ವೈಜ್ಞಾನಿಕ ಹೆಸರು** : ***Grewia flavescens***



©ನಾಗೇಶ್ ಓ. ಎಸ್. **ಕರಿ ಗರಕಲೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಕರಿ ಗರಕೆಲೆ ಕಾಡುಗಳಲ್ಲಿ ಸಾಮಾನ್ಯವಾಗಿ ಕಾಣಸಿಗುವ ಗಿಡ. ಸುಮಾರು ನಾಲ್ಕರಿಂದ ಐದು ಮೀಟರ್ ಎತ್ತರಕ್ಕೆ ಬೆಳೆಯುವ ಹಲವು ಕಾಂಡಗಳನ್ನೊಳಗೊಂಡ ಕುರುಚಲು ಗಿಡವಾಗಿದೆ. ಕಾಂಡವು ಕಂದು ಹಾಗು ಬೂದು ಮಿಶ್ರಿತ ಬಣ್ಣದಲ್ಲಿರುತ್ತದೆ. ಎಲೆಗಳು ತಿಳಿ ಹಸಿರು ಬಣ್ಣದಲ್ಲಿದ್ದು ಸುಮಾರು ಆರರಿಂದ ಹತ್ತು ಸೆಂ.ಮೀ ಉದ್ದ ಹಾಗು 2.5 ರಿಂದ 3.5 ಸೆಂ.ಮೀ ಅಗಲವಿದ್ದು ಎಲೆಯ ಕೊನೆ ಚೂಪಾಗಿರುತ್ತದೆ. ವರ್ಷದ ಜುಲೈ- ಆಗಸ್ಟ್ ತಿಂಗಳಲ್ಲಿ ಹೊಳೆಯುವ ಹಳದಿ ಬಣ್ಣದ ಹೂಗಳನ್ನು ಬಿಡುವ ಈ ಗಿಡದ ಹೂ ಸುಮಾರು 1.5 ಸೆಂ.ಮೀ ಇಂದ 2 ಸೆಂ.ಮೀ ಉದ್ದವಿದ್ದು, ಮೂರು ಮೂರು ಹೂಗಳು ಗೊಂಚಲಿನಂತೆ ಇರುತ್ತವೆ. ಈ ಗಿಡದ ಕಾಯಿಗಳು ಹಣ್ಣಾದಾಗ ಗಟ್ಟಿಯಾಗಿದ್ದು ಕಂದು ಬಣ್ಣದಲ್ಲಿರುತ್ತವೆ. ಪ್ರತೀ ಹಣ್ಣಿನಲ್ಲೂ ಒಂದು ಅಥವಾ ಎರಡು ಬೀಜಗಳಿರುತ್ತವೆ. ಈ ಹಣ್ಣಿನಲ್ಲಿ ಅತಿಯಾದ ಕಬ್ಬಿಣದ ಅಂಶವಿರುವುದರಿಂದ ಸಾಂಪ್ರದಾಯಿಕ ಆಯುರ್ವೇದದಲ್ಲಿ ರಕ್ತ ಹೀನತೆ ಗುಣಪಡಿಸಲು ಈ ಕಾಯಿಗಳನ್ನು ಬಳಸುತ್ತಾರೆ. ಕೆಲವು ಪ್ರದೇಶಗಳಲ್ಲಿ ಈ ಗಿಡದ ರೆಂಬೆಗಳಿಂದ ಬುಟ್ಟಿಗಳನ್ನು ಹೆಣೆಯಲು ಸಹ ಬಳಸುತ್ತಾರೆ.




# ವಿಶ್ವ ಘೇಂಡಾಮೃಗ ದಿನ
# ಸೆಪ್ಟೆಂಬರ್ 22

ಘೇಂಡಾಮೃಗಗಳನ್ನು ಆಂಗ್ಲಭಾಷೆಯಲ್ಲಿ *ರೈನೋ* ಎಂದು ಕರೆಯುತ್ತಾರೆ. ಇವು ಬೆಸ ಸಂಖ್ಯೆಯ ಕಾಲು ಬೆರಳುಗಳುಳ್ಳ "ರೈನೋ ಸಿರೊಟಿಡೆ" ಎಂಬ ಕುಟುಂಬಕ್ಕೆ ಸೇರಿವೆ. ಹುಲ್ಲನ್ನು ತಿಂದು ಬದುಕುವ ಈ ಸಸ್ಯಾಹಾರಿ ಜೀವಿಗಳು ಒಂದು ಟನ್ ತೂಕವಿರುತ್ತವೆ. ವಯಸ್ಕ ಘೇಂಡಾಮೃಗಗಳಿಗೆ ಮನುಷ್ಯನನ್ನು ಬಿಟ್ಟು, ಬೇರೆ ಯಾವುದೇ ವನ್ಯ ಪ್ರಾಣಿಗಳಿಂದಲೂ ಅಪಾಯವಿಲ್ಲ. ಈ ಘೇಂಡಾಮೃಗದ ಸಣ್ಣ ಮರಿಗಳನ್ನು ಹುಲಿ-ಚಿರತೆಯಂತಹ ದೊಡ್ಡ ಬೆಕ್ಕಿನ ಜಾತಿಯ ಪ್ರಾಣಿಗಳು ಸುಲಭವಾಗಿ ಬೇಟೆಯಾಡಬಲ್ಲವು. "ರೈನೋಸರಸ್" ಎಂಬುದು ಗ್ರೀಕರು ಬಳಸುತ್ತಿದ್ದ ಲ್ಯಾಟಿನ್ ಭಾಷೆಯ ಪದವಾಗಿದೆ. ರೈನೋ ಎಂದರೆ ಮೂಗು, ಕೆರಸ್ ಎಂದರೆ ಕೊಂಬು ಎಂದು ಅರ್ಥ. ಒಟ್ಟಿನಲ್ಲಿ ಮೂಗಿನ ಮೇಲೆ ಕೊಂಬು ಇರುವ ಪ್ರಾಣಿ ಎಂದರ್ಥ. ಘೇಂಡಾಮೃಗದ ಕೊಂಬುಗಳು ನಮ್ಮ ಉಗುರು ಮತ್ತು ಕೂದಲು ಯಾವ ಪ್ರೋಟೀನ್ ನಿಂದ ಆಗಿದೆಯೋ, ಅದೇ ಕೆರಾಟಿನ್ ಎಂಬ ಪ್ರೊಟೀನ್ ನಿಂದ ಮಾಡಲ್ಪಟ್ಟಿವೆ.

ಸದ್ಯ ಪ್ರಪಂಚದಾದ್ಯಂತ ಐದು ಪ್ರಭೇದದ ಘೇಂಡಾಮೃಗಗಳು ಜೀವಂತವಾಗಿವೆ. ಇವುಗಳಲ್ಲಿ ಎರಡು ಪ್ರಭೇದಗಳು ಆಫ್ರಿಕಾ ಖಂಡದಲ್ಲೂ, ಉಳಿದ ಮೂರು ಪ್ರಭೇದಗಳು ದಕ್ಷಿಣ ಏಷ್ಯಾ ಖಂಡದಲ್ಲೂ ಕಾಣಸಿಗುತ್ತವೆ. ಆಫ್ರಿಕಾದಲ್ಲಿ ಕಾಣಸಿಗುವ ಬಿಳಿ ಘೇಂಡಾಮೃಗ(*Ceratotherium simum)* ಮತ್ತು ಕಪ್ಪು ಘೇಂಡಾಮೃಗ(*Diceros bicornis*) ಎಂಬ ಎರಡೂ ಪ್ರಭೇದಗಳಲ್ಲಿ ಕಾಣಬಹುದಾದ ಮುಖ್ಯ ವ್ಯತ್ಯಾಸವೆಂದರೆ ಅವುಗಳ ಬಾಯಿಯ ಆಕಾರ. ಬಿಳಿ ಘೇಂಡಾಮೃಗಗಳಿಗೆ ಮೇಯಲು ಅಗಲವಾದ ತುಟಿಗಳಿದ್ದರೆ, ಕಪ್ಪು ಘೇಂಡಾಮೃಗಳು ಎಲೆಗಳನ್ನು ತಿನ್ನಲು ಸಹಾಯವಾಗುವಂತೆ ಉದ್ದವಾದ ಮೊನಚಾದ ತುಟಿಗಳಿರುತ್ತವೆ. ಉಳಿದ ಮೂರು ಪ್ರಭೇದದ ಘೇಂಡಾಮೃಗಗಳನ್ನು ದಕ್ಷಿಣ ಏಷ್ಯಾದ ಭೂಭಾಗಗಳಲ್ಲಿ ಕಾಣಬಹುದಾಗಿದೆ. ಅವು ಯಾವುವೆಂದರೆ ಜಾವನ್ ಘೇಂಡಾಮೃಗ (*Rhinoceros sondaicus* ), ಸುಮಾತ್ರನ್ ಘೇಂಡಾಮೃಗ (*Dicerorhinus sumatrensis),* ಮತ್ತು ಭಾರತದ ಘೇಂಡಾಮೃಗ (*Rhinoceros unicornis).*




ಆಫ್ರಿಕಾದ ಮತ್ತು ಸುಮಾತ್ರನ್ ಘೇಂಡಾಮೃಗಗಳಿಗೆ ಎರಡು ಕೊಂಬುಗಳಿರುತ್ತವೆ. ಆದರೆ ಜಾವನ್ ಮತ್ತು ಭಾರತದ ಘೇಂಡಾಮೃಗಗಳಿಗೆ ಒಂಟಿ ಕೊಂಬು ಇರುತ್ತದೆ. ಭಾರತ ಉಪಖಂಡದಲ್ಲಿ ಮಾತ್ರ ಕಂಡು ಬರುವ ಭಾರತದ ಘೇಂಡಾಮೃಗಗಳನ್ನು, ದೊಡ್ಡ ಕೊಂಬಿನ ಘೇಂಡಾಮೃಗ ಎಂದೂ ಸಹ ಕರೆಯುತ್ತಾರೆ. ಇವು ಆಫ್ರಿಕಾದ ಘೇಂಡಾಮೃಗಗಳಿಗೆ ಹೋಲಿಸಿದರೆ, ಗಾತ್ರದಲ್ಲಿ ಚಿಕ್ಕವು. ಇವುಗಳಲ್ಲಿ ಗಂಡು ಘೇಂಡಾಮೃಗ ಸುಮಾರು 2,200 ಕೆ.ಜಿ ತೂಕವಿದ್ದರೆ, ಹೆಣ್ಣು ಘೇಂಡಾಮೃಗ ಸುಮಾರು 1600 ಕೆ.ಜಿ ತೂಕವಿರುತ್ತದೆ. ಈ ಘೇಂಡಾಮೃಗಗಳಿಗೆ ದಪ್ಪವಾಗಿರುವ ಬೂದು-ಕಂದು ಚರ್ಮವಿದ್ದು, ಗುಲಾಬಿ ಬಣ್ಣದ ಚರ್ಮದ ಮಡಿಕೆಗಳಿರುತ್ತವೆ ಮತ್ತು ಅದರ ಮುಖದ ಮೇಲೆ ಒಂದು ಕೊಂಬನ್ನು ಹೊಂದಿರುತ್ತವೆ.

ಇದರ ಮೇಲಿನ ಕಾಲುಗಳು ಮತ್ತು ಭುಜಗಳನ್ನು ಮಡಿಕೆಗಳ ತರಹದ ಉಬ್ಬುಗಳಿಂದ ಮುಚ್ಚಿರುತ್ತದೆ. ಇದರ ರೆಪ್ಪೆ, ಕಿವಿ ಅಂಚುಗಳು ಮತ್ತು ಬಾಲದ ಕುಂಚಗಳನ್ನು ಹೊರತುಪಡಿಸಿ ದೇಹದ ಇತರೆ ಭಾಗಗಳಲ್ಲಿ ಕಡಿಮೆ ಕೂದಲನ್ನು ಹೊಂದಿದೆ. ಗಂಡು ಭಾರತದ ಘೇಂಡಾಮೃಗಗದ ಕುತ್ತಿಗೆಯ ಬಳಿ ದೊಡ್ಡ ದೊಡ್ಡ ಚರ್ಮದ ಮಡಿಕೆಗಳನ್ನು ಹೊಂದಿರುತ್ತದೆ. ಘೇಂಡಾಮೃಗಗಳು ಬಹಳ ಚೆನ್ನಾಗಿ ಈಜಬಲ್ಲವು. 55 km/h ವೇಗದಲ್ಲಿ ಸ್ವಲ್ಪ ಸಮಯ ಓಡಬಲ್ಲವು. ಅತ್ಯುತ್ತಮವಾದ ವಾಸನೆ ಗ್ರಹಿಸುವ ಸಾಮರ್ಥ್ಯವಿದ್ದರೂ ಇವುಗಳಿಗೆ ಕಣ್ಣಿನ ದೃಷ್ಟಿ ಕಡಿಮೆ.

ಸಾಮಾನ್ಯವಾಗಿ ವಯಸ್ಕ ಗಂಡುಗಳು ಒಂಟಿಯಾಗಿದ್ದು, ಹೆಣ್ಣು ಮತ್ತು ಮರಿ ಘೇಂಡಾಮೃಗಗಳು ಗುಂಪಿನಲ್ಲಿ ಜೀವಿಸುತ್ತವೆ. ಬೆಳಗಿನ ಝಾವ ಮತ್ತು ರಾತ್ರಿ ಬಹಳ ಚುರುಕಾಗಿ ಇರುವ ಈ ಜೀವಿಗಳು, ಬಿಸಿಲು ಮೇಲೇರುತ್ತಿದ್ದಂತೆ ನೆರಳಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತವೆ.




ಹಿಂದೆ ಭಾರತದ ಘೇಂಡಾಮೃಗಗಳ ಆವಾಸ ಪ್ರದೇಶ, ಪಾಕಿಸ್ತಾನದಿಂದ ಹಿಡಿದು ಮಾಯನ್ಮಾರ್ ವರೆಗೂ ಹಬ್ಬಿತ್ತು. ಹಾಗೂ ಚೀನಾದ ಕೆಲ ಭೂಭಾಗಗಳಲ್ಲೂ ಸಹ ಇವು ಕಂಡುಬರುತ್ತಿದ್ದವು. ಆದರೆ ಇಂದು ಮಾನವನ ಅತಿಕ್ರಮಣದಿಂದ ಕೇವಲ ಭಾರತದ ಕೆಲವೇ ಕೆಲವು ಸಂರಕ್ಷಿತ ಪ್ರದೇಶಗಳಲ್ಲಿ ಮಾತ್ರ ಇವು ಕಾಣಸಿಗುತ್ತವೆ. ಭಾರತದ ಅಸ್ಸಾಂ ರಾಜ್ಯದ ಗೊಲಘಟ್ ಜಿಲ್ಲೆಯಲ್ಲಿ ಇರುವ ಕಾಜಿರಂಗ ರಾಷ್ಟ್ರೀಯ ಉದ್ಯಾನವನವು ವಿಶ್ವದ ಎರಡನೇ ಮೂರು( 2/3) ಭಾಗದಷ್ಟು ಘೇಂಡಾಮೃಗಗಳಿಗೆ ಆವಾಸ ಸ್ಥಳವಾಗಿದೆ.

18 ಮತ್ತು 19ನೇ ಶತಮಾನದಲ್ಲಿ ಕ್ರೀಡೆಗಾಗಿ ಬೇಟೆಯಾಡುವುದು ಸಾಮಾನ್ಯವಾಗಿತ್ತು. 19ನೇ ಶತಮಾನದ ಮಧ್ಯಭಾಗದಲ್ಲಿ ಅಸ್ಸಾಮಿನ ಕೆಲವು ಬ್ರಿಟೀಷ್ ಮಿಲಿಟರಿ ಆಫೀಸರ್ ಗಳು ಒಬ್ಬೊಬ್ಬರೂ ಇನ್ನೂರಕ್ಕೂ ಹೆಚ್ಚು ಘೇಂಡಾಮೃಗಗಳನ್ನು ಬೇಟೆಯಾಡಿದ ದಾಖಲೆಗಳಿವೆ. 1908 ರ ಹೊತ್ತಿಗೆ ಕಾಜಿರಂಗ ಉದ್ಯಾನವನದಲ್ಲಿ ಉಳಿದಿದ್ದ ಘೇಂಡಾಮೃಗಗಳ ಸಂಖ್ಯೆ ಕೇವಲ 12 ಮಾತ್ರ!



ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿಯೇ ಇವು ಅವನತಿಯ ಹಾದಿಯನ್ನು ಹಿಡಿಯಲು, ಕಾಳಸಂತೆಯಲ್ಲಿ ಇವುಗಳ ಕೊಂಬುಗಳಿಗೆ ಇರುವ ಬೇಡಿಕೆಯೇ ಕಾರಣ. ಭಾರತ ಸರ್ಕಾರ ಘೇಂಡಾಮೃಗಗಳ ಸಂತತಿಯನ್ನು ಉಳಿಸಲು, ಇವುಗಳನ್ನು ಸಂರಕ್ಷಿತ ಪ್ರಭೇದಗಳ ಪಟ್ಟಿಗೆ ಸೇರಿಸಿ ಪೂರ್ಣ ಸಂರಕ್ಷಣೆ ಕೊಟ್ಟು, ಅವುಗಳ ಬೇಟೆಯನ್ನು ನಿಷೇಧಿಸಲಾಯಿತು. ಭಾರತ ಮತ್ತು ನೇಪಾಳ ಸರ್ಕಾರಗಳು ಘೇಂಡಾಮೃಗಗಳ ಸಂತತಿಯನ್ನು ಉಳಿಸಿ ಸಂರಕ್ಷಿಸಲು ಮಹತ್ತರ ತೀರ್ಮಾನಗಳನ್ನು ತೆಗೆದುಕೊಂಡು ಇವುಗಳನ್ನು ವಿನಾಶದ ಅಂಚಿನಿಂದ ಪಾರುಮಾಡಿದವು.

ಪ್ರಸ್ತುತ ಭಾರತೀಯ ಘೇಂಡಾಮೃಗವನ್ನು ಭಾರತೀಯ ವನ್ಯಜೀವಿ ಸಂರಕ್ಷಣಾ ಕಾಯ್ದೆ (1972) ಅಡಿಯಲ್ಲಿ ರಕ್ಷಿಸಲಾಗಿದೆ.  ಇದನ್ನು ವರ್ಗ-I ಪ್ರಭೇದವೆಂದು ಪರಿಗಣಿಸಲಾಗುತ್ತದೆ ಮತ್ತು ಪ್ರಸ್ತುತ ಐಯುಸಿಎನ್ ಸ್ಥಿತಿಯ ಪ್ರಕಾರ ಅಪಾಯದಲ್ಲಿ ಇರುವ  ವರ್ಗಕ್ಕೆ ಸೇರುತ್ತದೆ. ಸೆಪ್ಟಂಬರ್ 22ನೇ ವಿಶ್ವ ಘೇಂಡಾಮೃಗ ದಿನ ಎಂದು 2010ರಿಂದ ಆಚರಿಸುತ್ತಾ ಬರುತ್ತಿದ್ದೇವೆ. ಈ ಆಚರಣೆಯ ಮುಖ್ಯ ಉದ್ದೇಶ  ದೇಶದ ನಾಗರೀಕರಲ್ಲಿ ಈ ಘೇಂಡಾಮೃಗ ಎಲ್ಲಾ ಐದು ಪ್ರಭೇದಗಳನ್ನು ಅವನತಿಯ ಅಂಚಿನಿಂದ ಪಾರು ಮಾಡಿ ಉಳಿಸಲು ಜಾಗೃತಿ ಮೂಡಿಸುವುದಾಗಿದೆ.

**ಭಾರತ ಇಂದು  ವಿಶ್ವದಲ್ಲೇ ಅತಿ ಹೆಚ್ಚು ಘೇಂಡಾಮೃಗಗಳಿರುವ ಏಕೈಕ ದೇಶವಾಗಿದೆ.**




**ಮೂಲ ಲೇಖನ: ಚತುರ್ವೇದ್ ಸೇಟ್ ಆರ್.**
**ಕನ್ನಡಕ್ಕೆ ಅನುವಾದ: ಶಂಕರಪ್ಪ ಕೆ. ಪಿ.**




# ಬೆಳ್ಳಿಗೆರೆ ಚಿಟ್ಟೆ

ಇದು ಸಣ್ಣ ಗಾತ್ರದ ಕೇಸರಿ-ಬಿಳಿ ಮಿಶ್ರಿತ ಹೊಳೆಯುವ ಸುಂದರ ಚಿಟ್ಟೆ. ಮೇಲಿನ ರೆಕ್ಕೆಗಳ ಹಿಂಭಾಗ ಮತ್ತು ಕೆಳಗಿನ ರೆಕ್ಕೆಗಳ ಹಿಂಭಾಗದಲ್ಲಿ ಹೊಳೆವ ಬೆಳ್ಳಿಗೆರೆಗಳಿರುತ್ತವೆ ಹಾಗೂ ಪಕ್ಕದಲ್ಲಿರುವ ನಾಲ್ಕು ಉದ್ದವಾದ ಕೇಸರಿ ಪಟ್ಟಿಗಳಿಗೆ ಕಂದು ಅಂಚಿದೆ. ಉಳಿದ ಭಾಗವು ಬಿಳಿ ವರ್ಣದಿಂದ ಕೂಡಿದೆ. ಕೆಳಗಿನ ರೆಕ್ಕೆಗಳಲ್ಲಿ ಎರಡು ಪುಟ್ಟ ಬಾಲಗಳಿವೆ. ದೇಹವು ಬಿಳಿ ಮತ್ತು ಕಂದು ಪಟ್ಟಿಗಳಿಂದ ಕೂಡಿದೆ. ಕಾಲುಗಳು ಬಿಳುಪಾಗಿವೆ. ಗ್ರಹಣಾಂಗವು ಕಂದಾಗಿದ್ದು ಸೂಕ್ಷ್ಮವಾದ ಬಿಳಿ ಚುಕ್ಕೆಗಳಿವೆ. ರೆಕ್ಕೆಗಳನ್ನು ಅರಳಿಸಿದಾಗ ನೀಲಿ ವರ್ಣವು ಕಾಣುತ್ತದೆ. 27-35 ಮಿಲಿ ಮೀಟರ್ ರೆಕ್ಕೆಗಳ ಹರವು ಹೊಂದಿವೆ. ಕೇಸರಿ ಪಟ್ಟೆಗಳ ಮಧ್ಯದಲ್ಲಿ ಹೊಳೆಯುವ ಬೆಳ್ಳಿಗೆರೆ ಇರುವುದರಿಂದ ಇವಕ್ಕೆ ಬೆಳ್ಳಿ ಗೆರೆ ಚಿಟ್ಟೆಗಳೆನ್ನುವರು.

ಪೊದೆಗಳಲ್ಲಿ ವೇಗವಾಗಿ ಹಾರಾಡುತ್ತವೆ. ಹೂ-ಗಿಡಗಳ ಮೇಲೆ ಕುಳಿತು ಬಿಸಿಲು ಕಾಯಿಸುತ್ತವೆ. ತೇವಾಂಶವಿರುವ ಮಣ್ಣು ಇಲ್ಲವೇ ಪಕ್ಷಿಗಳ ಮಲದ ಮೇಲೆ ಕೂರುತ್ತವೆ. ಹೂವುಗಳ ಮೇಲೆ ಕುಳಿತು ಮಕರಂದ ಹೀರುವಾಗ ಹತ್ತಿರ ಹೋದರೂ ಹಾರುವುದಿಲ್ಲ ಆದರೆ ತೊಂದರೆ ಕಂಡು ಬಂದಾಗ ವೇಗವಾಗಿ ಅಲ್ಲಿಂದ ಹಾರಿ ಮತ್ತೆ ಸ್ವಲ್ಪ ಸಮಯದ ನಂತರ ಅದೇ ಜಾಗಕ್ಕೆ ಹಿಂದಿರುಗಿ ಬಂದು ಕೂರುವ ಸ್ವಭಾವವನ್ನು ಹೊಂದಿವೆ. ಈ ಚಿಟ್ಟೆಗಳ ಕಂಬಳಿ ಹುಳುವಿನ ಆಹಾರ ಸೀಗಡಿ, ಅಬನಾಶಿ ಬಳ್ಳಿ, ಕಕ್ಕೆ, ವಿಷಮಧಾರಿ, ತಮರಿ ಪುಷ್ಪ, ಎಲಚಿ (ಬಾರಿಹಣ್ಣು) ಜಾತಿ, ಕೌಳಿಕಾಯಿ, ಕಾರಿಹಣ್ಣಿನ ಸಸ್ಯಗಳಾಗಿವೆ. ಈ ಚಿಟ್ಟೆಗಳು ಕರುನಾಡಲ್ಲಿ ಮಾರ್ಚ್ ನಿಂದ ಅಕ್ಟೋಬರ್ ತಿಂಗಳಲ್ಲಿ ಕಂಡು ಬರುತ್ತವೆ.










ಬೆಳ್ಳಿಗೆರೆ ಚಿಟ್ಟೆಗಳನ್ನು "ಕಾಮನ್ ಸಿಲ್ವರ್‌ಲೈನ್" (Common Silverline) ಎಂದು ಆಂಗ್ಲ ಭಾಷೆಯಲ್ಲಿ ಕರೆದು ವೈಜ್ಞಾನಿಕವಾಗಿ "ಸ್ಪಿಂಡಾಸಿಸ್ ವಲ್ಕನಸ್" (Spindasis vulcanus) ಎಂದು ಹೆಸರಿಸಿ, ಸಂದಿಪದಿಗಳ ಕೀಟ (Insecta) ವರ್ಗದ ಲೆಪಿಡೋಪ್ಟೆರಾ (Lepidoptera) ಗಣದ ನೀಲಿ ಚಿಟ್ಟೆಗಳ "ಲೈಕೇನಿಡೇ" (Lycaenidae) ಕುಟುಂಬಕ್ಕೆ ಸೇರಿಸಲಾಗಿದೆ. ಡ್ಯಾನಿಶ್ ಪ್ರಾಣಿಶಾಸ್ತ್ರಜ್ಞ ಜೋಹಾನ್ ಕ್ರಿಶ್ಚಿಯನ್ ಫ್ಯಾಬ್ರಿಸಿಯಸ್ ರವರು 1775ರಲ್ಲಿ ಪ್ರಪ್ರಥಮವಾಗಿ ಈ ಚಿಟ್ಟೆಗಳನ್ನು ದಾಖಲಿಸಿದರು.

ಈ ಬೆಳ್ಳಿಗೆರೆ ಚಿಟ್ಟೆಗಳು ಕುರುಚಲು ಕಾಡು, ಎಲೆ ಉದುರುವ ಕಾಡು, ನಿತ್ಯ ಹರಿದ್ವರ್ಣ ಕಾಡು, ಶುಷ್ಕ ಪ್ರದೇಶ, ಕೃಷಿ ಪ್ರದೇಶ, ವಿರಳವಾದ ಸಸ್ಯಗಳಿರುವ ಪ್ರದೇಶ, ಚದುರಿದ ಅರಣ್ಯದ ಸಸ್ಯಪೊದೆಗಳಲ್ಲಿ ವಾಸಿಸುತ್ತವೆ. ನೈರುತ್ಯ ಮತ್ತು ಈಶಾನ್ಯ ಮುಂಗಾರು ಮಳೆ ಮಾರುತುಗಳ ಋತುವಿನಲ್ಲಿ ಇವುಗಳ ಸಂಖ್ಯೆಯು ಹೆಚ್ಚಾಗುತ್ತದೆ. ಈ ಚಿಟ್ಟೆಗಳು ನಮ್ಮ ದೇಶದಲ್ಲಿ ಕರ್ನಾಟಕ, ಮಹಾರಾಷ್ಟ್ರ, ಕೇರಳ, ತಮಿಳುನಾಡು, ಆಂಧ್ರ ಪ್ರದೇಶ, ತೆಲಂಗಾಣ, ಒರಿಸ್ಸಾ, ಪಶ್ಚಿಮ ಬಂಗಾಳ, ಮಧ್ಯ ಪ್ರದೇಶ, ಉತ್ತರ ಪ್ರದೇಶದ ಪ್ರಾಂತ್ಯಗಳಲ್ಲಿ ಕಂಡು ಬರುತ್ತವೆ. "ಸ್ಪಿಂಡಾಸಿಸ್ ವಲ್ಕನಸ್ ವಲ್ಕನಸ್" ಎಂಬ ಉಪತಳಿಯು ಭಾರತದಲ್ಲಿ, "ಸ್ಪಿಂಡಾಸಿಸ್ ವಲ್ಕನಸ್ ಫಸ್ಕಾ" ಎಂಬ ಉಪತಳಿಯು ಶ್ರೀಲಂಕಾದಲ್ಲಿ "ಸ್ಪಿಂಡಾಸಿಸ್ ವಲ್ಕನಸ್ ಜವಾನಸ್" ಎಂಬ ಉಪತಳಿಯು ಜಾವಾದಲ್ಲಿ "ಸ್ಪಿಂಡಾಸಿಸ್ ವಲ್ಕನಸ್ ಟವೋಯಾನಾ" ಎಂಬ ಉಪತಳಿಯು ಇವಾನ್ಸ್, ಮ್ಯಾನ್ಮಾರ್ ಹಾಗೂ ಥೈಲ್ಯಾಂಡ್ ಗಳಲ್ಲಿ ಈ ಚಿಟ್ಟೆಯ ಉಪ ಪ್ರಭೇದಗಳನ್ನು ಗುರುತಿಸಿ ದಾಖಲಿಸಲಾಗಿದೆ.










**ಚಿತ್ರ ಲೇಖನ:**
**ಶಶಿಧರಸ್ವಾಮಿ ಆರ್. ಹಿರೇಮಠ**
**ಹಾವೇರಿ ಜಿಲ್ಲೆ**



# ವಿಧವೆ ಜೇಡ

ಥೆರಿಡೀಡೆ ಕುಟುಂಬಕ್ಕೆ ಸೇರಿದ ಲ್ಯಾಟ್ರೊಡಕ್ಟಸ್ ಪ್ರಭೇದದ ವಿಧವೆ ಜೇಡ ಗದಗ ಜಿಲ್ಲೆಯ ನರಗುಂದ ಪಟ್ಟಣದ ಜ್ಞಾನ ಮುದ್ರಾ ಪಬ್ಲಿಕ್ ಶಾಲಾ ಆವರಣದಲ್ಲಿ ಪತ್ತೆಯಾಗಿದೆ. ಇದರ ವೈಜ್ಞಾನಿಕ ಹೆಸರು ಲ್ಯಾಟ್ರೊಡಕ್ಟಸ್. ಇಲ್ಲಿವರೆಗೆ ವಿಶ್ವದಲ್ಲಿ ಲ್ಯಾಟ್ರೊಡಕ್ಟಸ್ ಪ್ರಭೇದಕ್ಕೆ ಸೇರಿದ ಮೂವತ್ತೊಂದು ಜಾತಿಯ ಜೇಡಗಳನ್ನು ಗುರುತಿಸಿದ್ದು, ಭಾರತದಲ್ಲಿ ಈ ಪ್ರಭೇದಕ್ಕೆ ಸೇರಿದ ನಾಲ್ಕು ಜಾತಿ ಜೇಡಗಳನ್ನು ದಾಖಲಿಸಲಾಗಿದೆ. ಲ್ಯಾಟ್ರೊಡಕ್ಟಸ್ ಎಲಿಗನ್ಸ್, ಲ್ಯಾಟ್ರೊಡಕ್ಟಸ್ ಜಿಯೊಮೆಟ್ರಿಕಸ್, ಲ್ಯಾಟ್ರೊಡಕ್ಟಸ್ ಇರಿಥ್ರೊಮಿಲಸ್ ಮತ್ತು ಲ್ಯಾಟ್ರೊಡಕ್ಟಸ್ ಹಸ್ಸೆಲ್ಟೀ. ಭಾರತದಲ್ಲಿ ವಿಧವೆ ಜೇಡಗಳು ಗುಜರಾತ್ ರಾಜ್ಯದಲ್ಲಿ ಹೆಚ್ಚಾಗಿ ದಾಖಲಾಗಿದ್ದು ಇನ್ನುಳಿದ ಬೇರೆ ರಾಜ್ಯಗಳಲ್ಲಿ ಇವುಗಳ ದಾಖಲೆ ತುಂಬಾ ಕಡಿಮೆ ಮತ್ತು ವಿರಳ.



ಲ್ಯಾಟ್ರೊಡಕ್ಟಸ್ ಹಸ್ಸೆಲ್ಟೀ ಆಸ್ಟ್ರೇಲಿಯಾ ಮೂಲದ ವಿಧವೆ ಜೇಡವಾಗಿದ್ದು ನಮ್ಮ ದೇಶದಲ್ಲಿ ಕಾಣಸಿಗುವುದು ತುಂಬಾ ಅಪರೂಪ. ಕರ್ನಾಟಕದಲ್ಲಿ ಈ ಪ್ರಭೇದದ ಜೇಡಗಳ ಹಂಚಿಕೆ ಇದ್ದರೂ ಗೋಚರಿಸುವುದು ವಿರಳ ಮತ್ತು ಈ ಜೇಡಗಳ ಜೀವನ ಕ್ರಮದ ಅಧ್ಯಯನ ಕಡಿಮೆ. ಲ್ಯಾಟ್ರೊಡಕ್ಟಸ್ ಪ್ರಭೇದಕ್ಕೆ ಸೇರಿದ ಎಲ್ಲ ಮೂವತ್ತೊಂದು ಜಾತಿ ಜೇಡಗಳು ಅತ್ಯಂತ ವಿಷಕಾರಿಯಾಗಿದ್ದು ತಮ್ಮ ಬಲೆಯಲ್ಲಿ ಸಿಲುಕಿದ ಬೇಟೆಯನ್ನು ಕೊಲ್ಲಲು ಮತ್ತು ಜೀರ್ಣಿಸಿಕೊಳ್ಳಲು ಈ ವಿಷ ಸಹಕಾರಿಯಾಗಿದೆ. ಇವು ಬಲೆಯಲ್ಲಿ ಸಿಲುಕಿದ ನೊಣ, ಸೊಳ್ಳೆ, ದುಂಬಿ, ಮಿಡತೆ, ಪತಂಗ, ಮತ್ತು ಜೇಡಗಳನ್ನು ತಿನ್ನುತ್ತವೆ. ವಿರಳವಾಗಿ ಬಲೆಯಲ್ಲಿ ಬಿದ್ದ ಹಲ್ಲಿಗಳನ್ನು ಕೂಡಾ ತಿನ್ನಬಲ್ಲವು.



ಈ ಪ್ರಭೇದದ ಎಲ್ಲಾ ಜೇಡಗಳಲ್ಲಿ ಹೆಣ್ಣು ಜೇಡ ಗಂಡು ಜೇಡದೊಡನೆ ಮಿಲನವಾದ ನಂತರ ಗಂಡು ಜೇಡವನ್ನು ತಿನ್ನುತ್ತವೆ- ಈ ವಿದ್ಯಮಾನಕ್ಕೆ (Sexual cannabalism)ಲೈಂಗಿಕ ಸ್ವಜಾತಿ ಭಕ್ಷಕತೆ ಎನ್ನುತ್ತಾರೆ. ಈ ಕಾರಣದಿಂದಾಗಿ ಈ ಪ್ರಭೇದದ ಜೇಡಗಳಿಗೆ ವಿಧವೆ ಜೇಡವೆನ್ನುತ್ತಾರೆ.

ಹೆಣ್ಣು ಜೇಡವು 2-ಬ್ಯಾಚ್ ಗಳಂತೆ ಪ್ರತಿ ಬ್ಯಾಚ್ ನಲ್ಲಿ ಹತ್ತು ಮೊಟ್ಟೆಚೀಲಗಳನ್ನಿಡುತ್ತದೆ. ಪ್ರತಿ ಮೊಟ್ಟೆ ಚೀಲದಲ್ಲಿ 200-250 ಮೊಟ್ಟೆಗಳಿರುತ್ತವೆ. 25-28 ದಿನಗಳ ನಂತರ ಮೊಟ್ಟೆ ಚೀಲದಿಂದ ಮರಿಗಳು ಹೊರಬರುತ್ತವೆ. (ಸದ್ಯ ನನ್ನ ಅಧ್ಯಯನದ ಪ್ರಕಾರ ಮೂವತ್ತು ದಿನವಾದರು ಇನ್ನು ಮರಿ ಆಗಿರುವುದಿಲ್ಲ, ಏಕೆಂದರೆ ಅವು ಮೊಟ್ಟೆ ಇಟ್ಟ ಸ್ಥಳದ ಕೊಠಡಿಯ ಉಷ್ಣತೆ ಮತ್ತು ಹೊರ ಪರಿಸರದ ಉಷ್ಣತೆ ಮೇಲೆ ಅವಲಂಬಿತವಾಗಿರುತ್ತದೆ)

ಗಂಡು ಜೇಡಗಳು 6-7 ತಿಂಗಳು ಬದುಕಿದರೆ, ಹೆಣ್ಣು ಜೇಡಗಳ ಆಯಸ್ಸು 2-3 ವರ್ಷ. ಹೆಣ್ಣು ಜೇಡಗಳ ಲೈಂಗಿಕ ಸ್ವಜಾತಿ ಭಕ್ಷಕತೆ ವಿದ್ಯಮಾನದಿಂದಾಗಿ ಗಂಡು ಜೇಡದ ಆಯಸ್ಸು ಕಡಿಮೆ. ಇವು ನಿಶಾಚರಿ ಜೇಡಗಳಾಗಿದ್ದು ಬಳಕೆ ಇರದ ಸಂಗ್ರಹ ಕೋಣೆ, ಶೌಚಾಲಯ ಮತ್ತು ಗೊದಾಮುಗಳಂತ ಕಟ್ಟಡಗಳಲ್ಲಿನ ಕತ್ತಲಿನ ಆವಾಸವನ್ನು ಇಷ್ಟಪಡುತ್ತವೆ.



**ಚಿತ್ರ-ಲೇಖನ: ಮಂಜುನಾಥ ಎಸ್. ನಾಯಕ**
ಗದಗ ಜಿಲ್ಲೆ




**ವಿವಿ ಅಂಕಣ**

# ಅಷ್ಟಪದಿಯ ವಿಷ ಜಾಲ!

ಮುಂಜಾನೆಯ ಸಮಯದಲ್ಲಿ, ಅದರಲ್ಲೂ ಮಳೆಗಾಲದ ಆದಿಯಲ್ಲಿ ಬೆಳಗಿನ ವಿಹಾರ ಹೋಗುವವರಿಗೆ, ಆ ಮುಂಜಾನೆ ಮಂಜಿನ ಹನಿಗಳು ಸಣ್ಣ ಗಿಡದ ಎಲೆಗಳ ಮೇಲೆ ಮುತ್ತುಗಳು ಜೋಡಿಸಿರುವ ಹಾಗೆ ಕಾಣುತ್ತದೆ. ಅದನ್ನು ಕಂಡೊಡನೆ ಏನೋ ಒಂದು ಸಂತಸದ ತಂಗಾಳಿ ಒಳಗೆ ಬೀಸಿದ ಹಾಗೆ ಅನಿಸುತ್ತದೆ. ನೀವು ಎಂದಾದರೂ ಗಮನಿಸಿದ್ದೀರೇನು, ಅದೇ ಮಂಜಿನ ಹನಿಗಳ ಜೇಡರ ಬಲೆಯ ಮೇಲಿನ ಅಲಂಕಾರವನ್ನು? ಅಬ್ಬಾ... ಅದು ಇನ್ನೊಂದು ವಿಸ್ಮಯ. ಪ್ರಕೃತಿ ಮಾತೆ ತನ್ನ ಮಕ್ಕಳಿಗೆ ಬೆಳಿಗ್ಗೆ ಬೆಳಿಗ್ಗೆಯೇ ಎದ್ದು ಸಿಂಗರಿಸಿದಳೇನೋ ಅನ್ನುವಷ್ಟು ಸುಂದರವಾಗಿ ಕಾಣುತ್ತವೆ. ಇವುಗಳನ್ನು ನೋಡಿ ಆನಂದಿಸಲೆಂದೇ ಏನೋ ಪಕ್ಷಿಗಳು ಹಿನ್ನೆಲೆಯಲ್ಲಿ ಗಾಯನವನ್ನೂ ನಡೆಸಿರುತ್ತವೆ. ಇವನ್ನೆಲ್ಲಾ ನೋಡಿದರೆ, ನಮ್ಮ ಸುತ್ತಲಿನ ಪರಿಸರವನ್ನು ಎಷ್ಟು ಅಚ್ಚುಕಟ್ಟಾಗಿ ಮತ್ತು ಸುಂದರವಾಗಿ ಹೆಣೆಯಲಾಗಿದೆ ಎನಿಸುವುದಿಲ್ಲವೇ? ಇವನ್ನೆಲ್ಲಾ ಗಮನಿಸಿದ ಮೇಲೆ ಖಂಡಿತ ಅನಿಸುತ್ತದೆ. ಆದರೆ ಇಷ್ಟು ಚಂದವಾಗಿ ಹೆಣೆಯಲಾದ ನಮ್ಮ ಸುತ್ತಲಿನ ಪರಿಸರದಲ್ಲೇ ಎಷ್ಟೋ ನಿಗೂಢ, ಕರಾಳ ಸಂಗತಿಗಳು ಅಡಗಿರುವುದೂ ಅಷ್ಟೇ ಸತ್ಯ.

ಅದು ಹೇಗೆ, ಎಂದು ನೀವು ಕೇಳುವ ಮುಂಚೆಯೇ ನಾನೇ ಒಂದು ಉದಾಹರಣೆಯ ಮೂಲಕ ವಿವರಿಸಿಯೇ ಬಿಡುತ್ತೇನೆ ತಾಳಿ. ಅದಕ್ಕೂ ಮೊದಲು ಜೇಡಗಳ ಬಗ್ಗೆ ನಮಗಿರುವ ಜ್ಞಾನ ಏನು ಎಂದು ಸ್ವಲ್ಪ ನೋಡಿಬಿಡೋಣ. ಜೇಡ ಒಂದು ಕೀಟ, ಅದಕ್ಕೆ ಎಂಟು ಕಾಲುಗಳು, 6-8 ಕಣ್ಣುಗಳು, ಅವುಗಳಲ್ಲೇ ಸಾವಿರಾರು ಪ್ರಭೇದಗಳು (ಸಿಗ್ನೇಚರ್ ಜೇಡ, ನೆಗೆ ಜೇಡ, ತೋಳ ಜೇಡ ಹೀಗೆ...) ಬಹುತೇಕ ಜೇಡಗಳು ಬಲೆ ಹೆಣೆದು ಕಾಯ್ದು ಬೇಟೆಯಾಡಿ

ಆಹಾರ ಸೇವಿಸುವ ಕೀಟಾಹಾರಿಯಾದರೂ, ಅವುಗಳಲ್ಲೂ ಕೆಲವು ಸಸ್ಯಾಹಾರಿಗಳಿವೆ. ರಾತ್ರಿಯೆಲ್ಲಾ ಕಷ್ಟಪಟ್ಟು ಸರಿಯಾದ ಜಾಗ ಹುಡುಕಿ, ಬಲೆ ಹೆಣೆದು, ತಾಳ್ಮೆಯಿಂದ ಕಾಯ್ದುಮೇಲೆ ಬಲೆಗೆ ಬಿದ್ದ ಕೀಟ ಟಕ್ಕನೆ ಹಾರಿ ಹೋದರೆ ಏನು ಪ್ರಯೋಜನ? ಅಲ್ಲವೇ? ಆದರೆ ಜೇಡರ ಬಲೆಗೆ ಒಮ್ಮೆ ಸಿಕ್ಕರೆ ಅಲ್ಲಿಂದ ಬಚಾವಾಗುವುದು ಅಷ್ಟು ಸುಲಭದ ಮಾತಲ್ಲ. ಕೆಲವೊಮ್ಮೆ ನೀವು ಗಮನಿಸಿರಬಹುದು ಅಥವಾ ಟಿ.ವಿ/ಯೂಟ್ಯೂಬ್ ನಲ್ಲೋ ನೋಡಿರಬಹುದು, ದೊಡ್ಡ ದೊಡ್ಡ ಕೀಟಗಳು, ಚಿಟ್ಟೆಗಳು, ಪಕ್ಷಿಗಳೂ ಸಹ ಬಲೆಗೆ ಸಿಕ್ಕಿ ಹಾಕಿಕೊಂಡು ತಪ್ಪಿಸಿಕೊಳ್ಳಲಾಗದೆ ಜೇಡಕ್ಕೆ ಆಹಾರವಾಗಿರುವುದುಂಟು. ಹಾಗಾದರೆ ಜೇಡರ ಆ ಬಲೆಯ ಬಲ ಎಷ್ಟಿರಬಹುದು? ಊಹಿಸಿಕೊಳ್ಳಿ. ಇಷ್ಟೇ ಆಗಿದ್ದರೆ ಪರವಾಗಿಲ್ಲ. ಕೆಲವು ಜೇಡಗಳ ಇಷ್ಟು ಯಶಸ್ವಿ ಬೇಟೆಯ ಹಿಂದೆ ಇನ್ನೊಂದು ಗುಟ್ಟೂ ಅಡಗಿದೆ.



ಎಲ್ಲಿ…??

ಬೇರೆಲ್ಲೂ ಅಲ್ಲ ಅದೇ ಜೇಡದ ಜೇಡರ ಬಲೆಯಲ್ಲಿ. ಮೇಲೆ ಹೇಳಿದ ಹಾಗೆ ಮಂಜಿನ ಹನಿಗಳ ಸುಂದರ ನೋಟದ ಒಳಗೇ ಆ ಕರಾಳ ಸಂಗತಿಯೂ ಅಡಗಿದೆ.

ಏನದು…?

ನಮಗೆ ಕಾಣುವ ಹಾಗೆ ಜೇಡರ ಬಲೆ ಕೀಟಗಳ ಹಿಡಿಯುವ ಅಂಟು ಬಲೆ ಮಾತ್ರವಲ್ಲ. ಮಂಜಿನ ಹನಿಗಳ ಹಾಗೆಯೇ ವಿಷದ ಸೂಕ್ಷ್ಮ ಹನಿಗಳನ್ನೂ ಸಹ ಬಲೆಯ ಮೇಲೆ ಕೆಲವು ಜೇಡಗಳು ಲೇಪಿಸುತ್ತವೆ! ಇದು ನಂಬಲು ಸ್ವಲ್ಪ ಕಷ್ಟವಾದರೂ, ಸಂಶೋಧನೆ ಹೇಳಿದ ಮೇಲೆ ನಂಬಲೇಬೇಕು. ಹೌದು ಜೇಡಗಳ ಬೇಟೆ ಅಷ್ಟು ಯಶಸ್ವಿಯಾಗಬೇಕಾದರೆ ಇದೂ ಸಹ ಮುಖ್ಯ ಪಾತ್ರ ವಹಿಸುತ್ತದೆ. ಅದು ಹೇಗೆ? ಸಂಶೋಧನೆ ಏನು ಹೇಳುತ್ತಿದೆ? ಎಂಬ ನಿಮ್ಮ ಪ್ರಶ್ನೆಗಳ ಸಾಲಿಗೆ, ಸುಲಿದ ಬಾಳೆಹಣ್ಣಿನಂತೆ ಉತ್ತರಗಳು ಮುಂದಿವೆ.

ಮಾರಿಯೋ ಪಾಲ್ಮಾರ ಪ್ರಕಾರ, ನಾವೂ ಸಹ ನೋಡಿರಬಹುದಾದ ಸುರುಳಿಯಾಕಾರದ ಬಲೆ ಹೆಣೆಯುವ ಆರ್ಬ್ ವೀವರ್ ಎಂಬ ಸಾಮಾನ್ಯ ಹಿತ್ತಲ ಜೇಡವು ತನ್ನ ಬಲೆಯಲ್ಲಿ ನ್ಯೂರೋಟಾಕ್ಸಿನ್(ನರ ವಿಷ) ಸೂಕ್ಷ್ಮ ಕಣಗಳನ್ನೂ ಲೇಪಿಸುತ್ತವೆ. ಈ ಮಾತನ್ನು ಅವರ ಬಾಯಿಂದ ಕೇಳಿದ ತಕ್ಷಣವೇ ಅವರ ಸಹೋದ್ಯೋಗಿಗಳೆಲ್ಲಾ, ನೀವು ಈಗ ಅಂದುಕೊಳ್ಳುತ್ತಿರುವ ಹಾಗೆ, 'ನಿಂಗೆ ತಲೆ ಕೆಟ್ಟಿದೆ' ಎಂದೇ ಹೇಳಿದರಂತೆ. ಅದರಲ್ಲೇನು ತಪ್ಪಿಲ್ಲ ಬಿಡಿ. ಏಕೆಂದರೆ ಪ್ರಪಂಚದಲ್ಲಿಯೇ ಇದುವರೆಗೂ ಯಾರೂ ಸಹ ಇಂತಹ ವಿಷಯವನ್ನು ಊಹಿಸಲೂ ಇಲ್ಲ. ಜೇಡಕ್ಕೆ ತನ್ನ ಬೇಟೆಯು ತನ್ನ ಬಲೆಯಲ್ಲಿ ಸಿಕ್ಕಲು ಆ ಬಲೆಗಿರುವ ಅಂಟು ಗುಣವೇ ಸಾಕಾಗಿರುವುದರಿಂದ ಇಂತಹ ಒಂದು ಉಪಾಯ/ಗುಣ ಆ ಬಲೆಗೆ ಇರಬಹುದು ಎಂದು ಯೋಚಿಸಿಯೇ ಇರಲಿಲ್ಲ.

ಹಾಗೆಂದ ಮಾತ್ರಕ್ಕೆ ಪಾಲ್ಮೇರವರು ಹೇಳಿದ ಮಾತು ತಪ್ಪೆಂದಲ್ಲ. ಆ ಸಮಯದಲ್ಲಿ ಯಾರೂ ನಂಬಲಿಲ್ಲ. ಇನ್ನೊಂದು ಕೋನದಲ್ಲಿ ಯೋಚಿಸುವುದಾದರೆ, ಪಾಲ್ಮೇರಂತಹ ಜೀವರಸಾಯನಶಾಸ್ತ್ರದ ವಿಜ್ಞಾನಿ ಈ ಮಾತನ್ನು ಹೇಳುತ್ತಿದ್ದಾನೆ ಎಂದಮೇಲೆ ಏನೋ ಕಾರಣ ಇರಬೇಕಲ್ಲವೇ?



ಖಂಡಿತ ಇದೆ. ಈಗ ಹೇಳುತ್ತಿರುವ ಈ ಸಂದರ್ಭ ನಡೆದದ್ದು ಇಪ್ಪತ್ತೈದು ವರ್ಷಗಳ ಹಿಂದೆ. ಆಗ ಪಾಲ್ಮೇರವರು ವಾಸಿಸುತ್ತಿದ್ದ ಪ್ರದೇಶದಲ್ಲಿ ಈ ಆರ್ಬ್ ವೀವರ್ ಜೇಡವೂ ಸಹ ಹೆಚ್ಚಿನ ಸಂಖ್ಯೆಯಲ್ಲಿದ್ದವು. ಹುಳ ಹುಪ್ಪಟೆಗಳು ಹೋಗಿ ಜೇಡರ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದುದನ್ನು ಗಮನಿಸುತ್ತಲೇ ಇದ್ದರು. ಒಮ್ಮೆ ಅವರ ಕಣ್ಣೆದುರೇ ಒಂದು ಕೀಟ ಬಂದು ಬಲೆಯಲ್ಲಿ ಬಿತ್ತು. ಹಾಗೆ ಗಮನಿಸುತ್ತಿರುವಾಗ ಆ ಕೀಟ ನಿಮಿಷಗಳಲ್ಲಿ ಅರೆ ಪ್ರಜ್ಞಾಹೀನ ಸ್ಥಿತಿಯಲ್ಲಿ ನಾಲಿಗೆ ಹೊರ ಚಾಚಿ, ಜೇಡವೇ ಬಂದು ವಿಷ ಬಿಟ್ಟಹಾಗೆ ವರ್ತಿಸುವುದನ್ನು ಗಮನಿಸಿದರು. ನಂತರ ಅದನ್ನು ಬಲೆಯಿಂದ ಬಿಡಿಸಿ ಕೆಳಗೆ ಬಿಟ್ಟರು. ಆಶ್ಚರ್ಯವೆಂದರೆ ಆಗಲೂ ಆ ಕೀಟ ಕಂಠಪೂರ್ತಿ ಕುಡಿದವರಂತೆ ತಟ್ಟಾಡುತ್ತಾ, ದಿಕ್ಕು-ದೆಸೆ ಇಲ್ಲದೇ ಓಡಾಡುತ್ತಿತ್ತಂತೆ. ಪಾಲ್ಮೇರವರು ನ್ಯೂರೋಟಾಕ್ಸಿನ್ ಗಳ ಮೇಲೆಯೇ ಹಲವಾರು ವರ್ಷಗಳಿಂದ ಕೆಲಸಮಾಡುತ್ತಿದ್ದರಾದ್ದರಿಂದ ತಕ್ಷಣ, ಇದು ಯಾವುದೋ ನ್ಯೂರೋಟಾಕ್ಸಿನ್ ನ ಕೆಲಸವೇ ಇರಬೇಕು ಎಂದುಕೊಂಡರು. ಆದರೆ ಆಗ ಅದನ್ನು ನಿರೂಪಿಸಲು ಆಗಲಿಲ್ಲ. ಹಲವು ವರ್ಷಗಳ ಬಳಿಕ ತನ್ನ PhD ಶಿಷ್ಯನ ಮೂಲಕ ನಡೆಸಿದ ಪ್ರಯೋಗ ಮತ್ತು ಅಧ್ಯಯನಗಳಿಂದ ಅದೇ ನಿಜವೆಂದು ಹೇಳಬಹುದಾಗಿದೆ.

ಅವರು ಬನಾನ ಜೇಡವೆಂಬ ಒಂದು ಬಗೆಯ ಆರ್ಬ್ ವೀವರ್ ಜೇಡದ ಬಲೆಯನ್ನು ತೆಗೆದುಕೊಂಡರು. ನಂತರ ಅದರಲ್ಲಿನ ಜೀನ್ ಮತ್ತು ಪ್ರೋಟೀನ್ ಗಳನ್ನು ಅಭ್ಯಸಿಸಿದಾಗ ಆಶ್ಚರ್ಯಕ್ಕಿಂತ ಹೆಚ್ಚು ಖುಷಿಯೇ ಆಯಿತು ಎಂದರೆ ಸುಳ್ಳಾಗದು. ಏಕೆಂದರೆ ವರ್ಷಗಳ ಹಿಂದೆ ಪಾಲ್ಮಾ ಊಹಿಸಿದ ಹಾಗೆ ಆ ಪ್ರೋಟೀನ್ ಗಳು ನ್ಯೂರೋಟಾಕ್ಸಿನ್ ಪ್ರೋಟೀನ್ ಗಳನ್ನೇ ಹೋಲುತ್ತಿದ್ದವು. ಹಾಗಿದ್ದರೆ ಆರ್ಬ್ ವೀವರ್ ಪ್ರಭೇದದ ಎಷ್ಟೋ ಜೇಡರ ಬಲೆಗಳು ಈ ತರಹದ ನ್ಯೂರೋಟಾಕ್ಸಿನ್ ಅನ್ನು ಹೊಂದಿರಬಹುದು, ಎನ್ನುತ್ತಾರೆ.



ನಂತರ ಈ ಪ್ರೋಟೀನ್ ಗಳಿದ್ದ ಸೂಕ್ಷ್ಮ ಹನಿಗಳನ್ನು ತೆಗೆದುಕೊಂಡು ಜೇನು ಹುಳುಗಳಿಗೆ ಕೊಟ್ಟಾಗ ಒಂದು ನಿಮಿಷದ ಒಳಗೇ ಜೇನು ಹುಳುಗಳು ಜಡ ಹಿಡಿದ ಹಾಗಾದವು. ಇದನ್ನು ತಿಳಿಸಿದ ನಂತರ ಆಸ್ಟ್ರೇಲಿಯಾದ ಒಬ್ಬ ವಿಷ ಸಂಶೋಧಕ ಹೇಳಿದ್ದು ಹೀಗೆ. 'ವಿಷಯುಕ್ತ ಜೇಡರ ಬಲೆಗಳಿರುವುದು ಸಾಧ್ಯವಿದೆ. ಏಕೆಂದರೆ ಜೇಡಗಳು ತಮ್ಮ ಬಲೆಯನ್ನು ಇರುವೆಗಳಂತಹ ಉಪದ್ರವಕಾರಿ ಹಾಗು ತನ್ನ ಬೇಟೆಯನ್ನು ಕದಿಯುವ ಇತರ ಕೀಟಗಳಿಂದ ರಕ್ಷಿಸಲು ಮತ್ತು ಅವುಗಳನ್ನು ಓಡಿಸಲು ಈ ತರಹದ ವಿಷದ ಸೂಕ್ಷ್ಮಕಣಗಳನ್ನು ಬಲೆಯಲ್ಲಿ ಲೇಪಿಸಿರಬಹುದು' ಎಂದು. ಜೊತೆಗೆ ಪಾಲ್ಮಾರವರೂ ಸಹ ತಮ್ಮ ವಿಧ್ಯಾರ್ಥಿಗಳಿಗೆ 'ಅಷ್ಟಪದಿಯ ಈ ವಿಷಜಾಲ'ದಲ್ಲಿರುವ ಇನ್ನಿತರ ಪ್ರೋಟೀನ್ ಗಳನ್ನು ಅಧ್ಯಯನ ಮಾಡಿ ಅವುಗಳ ಕೆಲಸ ಕಾರ್ಯಗಳನ್ನು ಪತ್ತೆ ಹಚ್ಚಲು ಹೇಳಿದ್ದಾರೆ. ಇದರಿಂದ ಈಗ ಮಾಡಿರುವ ಈ ಸಂಶೋಧನೆಗೆ ಪುಷ್ಟಿ ನೀಡುವ ಇನ್ನೂ ಹೊಸ ವಿಚಾರಗಳ ಅನಾವರಣವಾಗಬಹುದು.

ಇದರ ಜೊತೆ ಜೊತೆಗೇ…ಓದುಗರೇ, ನಿಮ್ಮ ಸಣ್ಣ ಪುಟ್ಟ ಸಂಶೋಧನೆಗಳ, ಆಲೋಚನೆಗಳ ಅಥವಾ ಪ್ರಕೃತಿಯೊಂದಿಗಿನ ಅನುಭವ, ಅನಿಸಿಕೆಗಳ ಅನಾವರಣ ಮಾಡಲು ಕಾನನ ಒಂದು ಉತ್ತಮ ವೇದಿಕೆ, ಮರೆಯದಿರಿ.



**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ.ಸಿ.ಜಿ. ಬೆಂಗಳೂರು**



# ಮಳೆಯ ರುದ್ರನರ್ತನ

ಗಗನದಿ ಕಾರ್ಮೋಡಗಳ ಆರ್ಭಟ
ಬಲು ಜೋರಾಗಿರಲು
ಸುರಿ ಸುರಿದು ಬಂತು ಮಳೆ
ಅಸ್ತವ್ಯಸ್ತವಾಯಿತು ಇಳೆ

ಭೋರ್ಗರೆದು ಹರಿಯಿತು ಹೊಳೆ
ಸರ್ವನಾಶವಾದವು ಸೊಂಪಾಗಿದ್ದ ಬೆಳೆ
ವಿಚಲಿತಗೊಂಡಿತು ಜೀವ ಕಳೆ
ಸರಿಹೋದಿತೇ ಇದು ಇಂದು ನಾಳೆ

ಎಂದೆಂದು ಕಂಡು ಕೇಳರಿಯದ ನೆರೆ
ಜನ ಹೋದರು ದೈವದ ಮೊರೆ
ಕಾಯುತ್ತಿಹರು ಮಳೆಯ ರುದ್ರನರ್ತನಕ್ಕೆ ತೆರೆ
ಜನಗಳಿಗಿದು ಗಾಯದ ಮೇಲೆ ಬರೆ

ಜನಜೀವನ ನೀರಲ್ಲಿ ನೆನೆ ನೆನೆ
ರೋಗ ರುಜಿನಗಳು ಮಾಡಿ ದವು ಮನೆ
ಸಿರಿ ಸಂಪತ್ತು ಕೊಚ್ಚಿಕೊಂಡು
ಹೋಗುತಿಹವು ಬಿರ್ರನೇ
ಪ್ರಕೃತಿ ಮಾತೆ ಎಂದು, ನಿನ್ನೀ ಕೋಪಕ್ಕೆ ಕೊನೆ

- ವಿಜಯಕುಮಾರ್ ಎಚ್.ಕೆ.
ರಾಯಚೂರು

# ಪ್ರಕೃತಿ ಬಿಂಬ



**ಅಂಬೋಲಿ ಪೊದೆ ಕಪ್ಪೆ** **© ಸೇಪುರಿ ಸಾಯಿ ಅಖಿಲ್ ತೇಜ**

ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳ ಮಹಾರಾಷ್ಟ್ರದ ಅಂಬೋಲಿಯಿಂದ ಹಿಡಿದು ಕ್ಯಾಸಲ್ ರಾಕ್, ಲೋಂಡಾ ಹಾಗು ಕರ್ನಾಟಕದ ಜೋಗ್ ಫಾಲ್ಸ್, ಮಾವಿನಗುಂಡಿ ಮತ್ತು ಕುದುರೆಮುಖದವರೆಗೂ ಈ ಅಪರೂಪವಾದ ಪೊದೆಗಪ್ಪೆಗಳು ಕಾಣಸಿಗುತ್ತವೆ. ಗಂಡು ಕಪ್ಪೆಗಳು ಹೆಣ್ಣಿಗಿಂತ ತುಸು ಚಿಕ್ಕದಾಗಿರುತ್ತದೆ. ಕೂಗುವಾಗ ಗಂಡು ಕಪ್ಪೆಯ ಗಾಯನ ಪದರವು ಪಾರದರ್ಶಕವಾಗಿರುತ್ತದೆ. ನಗರಗಳು ಮತ್ತು ಪ್ರವಾಸಿಗರು ಹೆಚ್ಚಾಗುತ್ತಿದ್ದಂತೆ ಇವುಗಳ ಆವಾಸಸ್ಥಾನಗಳಿಗೆ ತೊಂದರೆಯಾಗುತ್ತಿದೆ.



**ಮಲೆ ಮಂಡಲ ಹಾವು** © **ಸೇಪುರಿ ಸಾಯಿ ಅಖಿಲ್ ತೇಜ**

ಮಲೆ ಮಂಡಲ ಹಾವುಗಳು ಭಾರತದ ಪಶ್ಚಿಮ ಘಟ್ಟಗಳಿಗೆ ಸೀಮಿತವಾಗಿರುವ ವಿಷಕಾರಿ ಹಾವುಗಳು. ಹಳದಿ, ಹಸಿರು ಮತ್ತು ಕಂದು ಬಣ್ಣಗಳನ್ನು ಒಳಗೊಂಡಂತೆ ಅನೇಕ ವಿಭಿನ್ನ ಬಣ್ಣಗಳನ್ನು ಹೊಂದಿರುವ ಬಹುರೂಪಿ ಇದು. ಈ ಮೇಲಿನ ಚಿತ್ರದಲ್ಲಿ ಕಂದು ಬಣ್ಣದ ರೂಪಿಯ(ಮಾರ್ಫ್)ನ್ನು ಇಲ್ಲಿ ತೋರಿಸಲಾಗಿದೆ. ವಯಸ್ಕ ಹಾವುಗಳು ತಲೆಯಿಂದ ಬಾಲದವರೆಗು ಸುಮಾರು 105-110 ಸೆಂ.ಮೀ ವರೆಗು ಕಾಣಸಿಗುತ್ತವೆ. ಮಲಬಾರ್ ಪಿಟ್ ವೈಪರ್ ಗಳು ಹೆಚ್ಚಾಗಿ ರಾತ್ರಿಯಲ್ಲಿ ಸಕ್ರಿಯವಾಗಿದ್ದು, ಬೆಳಗಿನ ಸಮಯದಲ್ಲಿ ನಿಷ್ಕ್ರಿಯವಾಗಿರುತ್ತವೆ. ಮಳೆಗಾಲದಲ್ಲಿ ಹೆಚ್ಚಾಗಿ ಕಂಡುಬರುವ ಇವುಗಳು ಕಪ್ಪೆ, ಹಲ್ಲಿ, ಇಲಿ, ಸಣ್ಣ ಪ್ರಾಣಿಗಳು ಮತ್ತು ಪೊದೆಗಳಲ್ಲಿ ಗೂಡುಕಟ್ಟುವ ಪಕ್ಷಿಗಳನ್ನು ಬೇಟೆಯಾಡುತ್ತವೆ. ಇದರ ವಿಷವು ಮಾನವನಿಗೆ ಊತ ಹಾಗು ತೀವ್ರ ನೋವು ಉಂಟುಮಾಡುತ್ತದೆ. ಕ್ರಮೇಣ 2-3 ದಿನಗಳಲ್ಲಿ ಕಡಿಮೆಯಾಗುತ್ತದೆ. ನಿಧಾನವಾಗಿ ಚಲಿಸುವ ಇವುಗಳು ಶತ್ರುವನ್ನು ಅತೀ ವೇಗವಾಗಿ ಹೊಡೆಯುವ ಸಾಮರ್ಥ್ಯವನ್ನು ಹೊಂದಿವೆ.



**ಜಿಗಿಯುವ ಜೇಡಗಳು** © ಸೇಪುರಿ ಸಾಯಿ ಅಖಿಲ್ ತೇಜ

ಸಾಲ್ಟಿಸಿಡೇ ಕುಟುಂಬಕ್ಕೆ ಸೇರಿರುವ ಈ ಜಿಗಿಯುವ (ಜಂಪಿಂಗ್) ಜೇಡಗಳಲ್ಲಿ 6000ಕ್ಕೂ ಹೆಚ್ಚು ಜಾತಿಗಳಿವೆ. ಇವುಗಳಲ್ಲಿ ಕೆಲವು ಪ್ರಭೇದಗಳು ನಿಧಾನವಾಗಿ ಚಲಿಸುತ್ತವೆ ಕೆಲವಂತೂ ತುಂಬಾ-ಚುರುಕಾಗಿ ಒಡುತ್ತವೆ ಹಾಗು ಜಿಗಿಯುತ್ತವೆ. ಇದರ ಜಿಗಿಯುವ ಗುಣವು ಬೇಟೆಯಾಡುವಾಗ, ಬೆದರಿಕೆ ಮೂಡಿಸುವಾಗ ಮತ್ತು ದೊಡ್ಡ ಅಂತರವನ್ನು ದಾಟುವಾಗ ಗಮನಿಸಬಹುದು. ಜಂಪಿಂಗ್ ಜೇಡಗಳನ್ನು ಸಾಮಾನ್ಯವಾಗಿ ಅವುಗಳ ಕಣ್ಣಿನಿಂದ ಗುರುತಿಸಲಾಗುತ್ತದೆ. ಎಲ್ಲಾ ಜಂಪಿಂಗ್ ಜೇಡಗಳು ನಾಲ್ಕು ಜೋಡಿ ಕಣ್ಣುಗಳನ್ನು ಹೊಂದಿವೆ. ಮುಂಭಾಗದಲ್ಲಿರುವ ಕಣ್ಣುಗಳು ಹಿಂಭಾಗದ ಕಣ್ಣುಗಳಿಗಿಂತ ದೊಡ್ಡದಾಗಿರುತ್ತದೆ. ಜೇಡಗಳು ಕೀಟಗಳಲ್ಲ, ಕೀಟಗಳದ್ದೇ ಬೇರೆ ಗುಂಪು, ಜೇಡಗಳದ್ದೇ ಬೇರೆ ಗುಂಪು. ಜೇಡಗಳು ಮತ್ತು ಕೀಟಗಳನ್ನು ಅವುಗಳ ದೇಹದ ವಿಂಗಡಣೆಯ ಆಧಾರದ ಮೇಲೆ ಬೇರ್ಪಡಿಸಬಹುದು. ಜೇಡಗಳ ದೇಹವು ಎರಡು ಮುಖ್ಯ ವಿಭಾಗಗಳನ್ನು ಹೊಂದಿದೆ, ಆದರೆ ಕೀಟವು ತಲೆ, ಎದೆಗೂಡು ಮತ್ತು ಹೊಟ್ಟೆಯೆಂಬಂತೆ ಮೂರು ಭಾಗಗಳನ್ನು ಹೊಂದಿರುತ್ತವೆ. ಎಲ್ಲಾ ಕೀಟಗಳು ಆರು ಕಾಲುಗಳು, ಎರಡು ಆ್ಯಂಟೆನಾಗಳನ್ನು ಹೊಂದಿರುತ್ತವೆ. ಜೇಡಗಳು ತಲೆ ಮತ್ತು ದೇಹ ಎರಡು ಭಾಗಗಳನ್ನು ಹೊಂದಿದ್ದು ಎಂಟು ಕಾಲುಗಳನ್ನು ಹೊಂದಿರುತ್ತವೆ.



**ಸುವ್ವಿ ಹಕ್ಕಿ** **© ಸೇಪುರಿ ಸಾಯಿ ಅಖಿಲ್ ತೇಜ**

ಸುವ್ವಿ ಹಕ್ಕಿಯು ಭಾರತದೆಲ್ಲೆಡೆ ಕಾಣಸಿಗುವ ಗುಬ್ಬಚ್ಚಿಗಿಂತ ಚಿಕ್ಕದಾದ ಪಕ್ಷಿ. ನೆತ್ತಿ, ಕತ್ತಿನ ಹಿಂಭಾಗ, ರೆಕ್ಕೆ, ಬಾಲದ ಮೇಲ್ಭಾಗದಲ್ಲಿ ಕಡು ಬೂದು ಮಿಶ್ರಿತ ಪಾಚಿ ಬಣ್ಣವಿರುತ್ತದೆ. ಇದಕ್ಕೆ ಉದ್ದ ಬಾಲವಿದ್ದು ಅದರ ಅಂಚು ಕಪ್ಪು-ಬಿಳಿ ಬಣ್ಣದಲ್ಲಿರುತ್ತದೆ. ನೀಳವಾದ ಕಾಲುಗಳು ಹಾಗೂ ಚಿಕ್ಕದಾದ ಕಪ್ಪು ಕೊಕ್ಕನ್ನು ಹೊಂದಿರುವ ಸುವ್ವಿ ಹಕ್ಕಿಯು ಮುಸಿಕ್ಯಾಪಿಡೇ ಕುಟುಂಬಕ್ಕೆ ಸೇರುತ್ತದೆ . ಪ್ರಿನಿಯಾ ಸೊಸಿಯಾಲಿಸ್ ಎಂಬುದು ಇದರ ವೈಜ್ಞಾನಿಕ ಹೆಸರು. ಇದರ ಕರೆಯ ವೈಖರಿಯಿಂದ ಸ್ಥಳೀಯವಾಗಿ ಟುವ್ವಿ ಹಕ್ಕಿ ಎಂದು ಕರೆಯಲಾಗುತ್ತದೆ. ಹೂದೋಟಗಳು, ಕಾಡಂಚಿನ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಾಣಸಿಗುವ ಇವುಗಳು ಪೊದೆ, ಜೊಂಡು, ವಾಟೆಗಳಲ್ಲಿ ವಾಸಿಸುತ್ತವೆ. ದೊಡ್ಡ ಎಲೆಗಳನ್ನು ಹೆಣೆದು ಮಧ್ಯದಲ್ಲಿ ಹತ್ತಿ, ನಾರು ಇತ್ಯಾದಿಗಳಿಂದ ಬಟ್ಟಲಿನಾಕಾರದ ಗೂಡನ್ನು ಕಟ್ಟುತ್ತವೆ. ಇದು ಸುಮಾರು 3-5 ಮೊಟ್ಟೆಗಳನ್ನಿಟ್ಟು 10-12 ದಿನಗಳ ಕಾಲ ಕಾವುಕೊಟ್ಟು ಮರಿಮಾಡುತ್ತವೆ.

**ಛಾಯಾಚಿತ್ರ: ಸೇಪುರಿ ಸಾಯಿ ಅಖಿಲ್ ತೇಜ**

**ಲೇಖನ: ಧನರಾಜ್ ಎಂ.**

# ನೀವೂ ಕಾನನಕ್ಕೆ ಬರೆಯಬಹುದು


© ಪೃಥ್ವಿ ಬಿ.

ಸುಂದರ ಸೃಷ್ಟಿಯಾದ ಭೂರಮೆಯು ಹಸಿರನ್ನು ಉಸಿರಾಗಿಸಿ, ಇಲ್ಲಿನ ಜೀವ ವೈವಿಧ್ಯತೆಗಳಿಂದ ಕಂಗೊಳಿಸುತ್ತಿದೆ. ಜೀವಿಗಳಿರುವ ಏಕೈಕ ಗ್ರಹವಾದ ಭೂಮಿಯು 4.6 ಬಿಲಿಯನ್ ವರ್ಷಗಳ ಹಿಂದೆ ಸೃಷ್ಟಿಯಾಗಿದ್ದು, ಎಣಿಕೆಗೂ ಸಿಗದಷ್ಟು ಜೀವಸಂಕುಲಗಳನ್ನು ಹೊಂದಿದೆ. ಪ್ರತಿದಿನವೂ ಹೊಸದನ್ನು ಅನ್ವೇಷಿಸಲು ವಿಜ್ಞಾನಿಗಳಿಗೆ ಪ್ರೇರಣೆಯಾಗುತ್ತಿದೆ.

ಜೀವಿಗಳು ಜೀವಿಸಲು ಅವಶ್ಯಕವಿರುವ ಮೂಲಭೂತ ಸೌಕರ್ಯಗಳು ಭೂಮಿಯ ಮೇಲೆ ಸಿದ್ಧವಾದ ನಂತರ ಒಂದೊಂದೇ ಜೀವಿಗಳು ಆಗಮಿಸಲಾರಂಭಿಸಿದವು. ಸಮುದ್ರದಲ್ಲಿ ಆಮ್ಲಜನಕ ಮತ್ತು ವಾತಾವರಣ ಸಿದ್ಧವಾದಾಗ ಜಲಚರಗಳು ಜನಿಸಿದವು, ನಂತರ ಭೂಮಿಯ ಮೇಲೆ ಗಿಡಗಳು ಬೆಳೆಯಲಾರಂಭಿಸಿದವು. ಕಾಡುಗಳು ಸೃಷ್ಟಿಯಾದವು. ನಿಧಾನಗತಿಯಲ್ಲಿ ಕಶೇರುಕಗಳು ಪ್ರಾರಂಭವಾದವು. ನಂತರ ಉಭಯವಾಸಿಗಳು, ಸರೀಸೃಪಗಳು, ಹಾರುವ ಸರೀಸೃಪಗಳು ಬರಲಾರಂಭಿಸಿದವು. ದೈತ್ಯ ಜೀವಿಗಳಾದ ಡೈನೋಸರ್ ಗಳ ಅಂತ್ಯವಾದ ನಂತರ ಸಸ್ತನಿಗಳು ಅಭಿವೃದ್ಧಿ ಹೊಂದಿದವು. ಪ್ರಾಣಿಗಳ ಇತಿಹಾಸ ಇಷ್ಟಿದ್ದರೂ, ಕೊನೆಯದಾಗಿ ಬಂದು, ಇತರ ಜೀವಿಗಳಿಗಿಂತ ಬುದ್ಧಿಶಕ್ತಿಯಿಂದ ಭಿನ್ನವೆಂದು ಬಿಂಬಿಸಲ್ಪಡುವ 'ಮಾನವ', ತಾನು ಪ್ರಕೃತಿಯ ಭಾಗವೆಂಬುದನ್ನು ಮರೆತು ಪ್ರಕೃತಿಯನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳುವ ವ್ಯರ್ಥ ಪ್ರಯತ್ನ ಮಾಡುತ್ತಿದ್ದಾನೆ. ಪ್ರಾಣಿಗಳನ್ನು ತನ್ನ ಇಚ್ಛೆಯಂತೆ ನಡೆಸಿಕೊಳ್ಳುವುದು, ಕೊಲ್ಲುವುದು ಹೆಚ್ಚಾಗುತ್ತಿದೆ. ಹೀಗೇ ಮುಂದುವರೆದರೆ ಮುಂದೊಂದು ದಿನ ಪರಿಸರ ದಲ್ಲಿ ಅಸಮತೋಲನ ಉಂಟಾಗಿ ಮುಂದೆ ಏನಾಗುವುದು ಎಂಬುದನ್ನು ಊಹಿಸುವುದು ಸಹ ಕಷ್ಟವಿದೆ. ಹಾಗಾಗಿ ಇನ್ನು ಮುಂದಾದರೂ ಪ್ರಾಣಿಗಳೂ ನಮ್ಮಂತೆಯೇ ಪ್ರಕೃತಿಯ ಭಾಗವೆಂದು ಅರಿತು ಅವುಗಳ ರಕ್ಷಣೆಗೆ ಮುಂದಾಗಬೇಕಿರುವುದು ಈಗಿನ ತುರ್ತಾಗಿದೆ. ಇದರ ನಿಮಿತ್ತ ಪ್ರತಿವರ್ಷ ಅಕ್ಟೋಬರ್ 4 ನ್ನು ವಿಶ್ವ ಪ್ರಾಣಿ ದಿನವನ್ನಾಗಿ ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಪ್ರತಿಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com

**ಅಂಚೆ ವಿಳಾಸ**:
Study House,
ಕಾಳೇಶ್ವರಿ ಗ್ರಾಮ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.